


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 05-03-2021 ಪ್ರಶ್ನೆ ಸಂಖ್ಯೆ : 661 (611)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಎಸ್.ನಾಗರಾಜ್ (ಸಂದೇಶ್ ನಾಗರಾಜ್)(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 05-03-2021

ಉತ್ತರಿಸುವ ಸಚಿವರು: ಮಾನ್ಯ ಉಪ ಮುಖ್ಯಮಂತಿಗಳು ಹಾಗೂ ಸಾರಿಗೆ ಸಚಿವರು

ವಿಷಯ : ಮೈಸೂರು ಮಾನಸ ಗಂಗೋತ್ರಿಗೆ ಸಮರ್ಪಕ ರೀತಿಯಲ್ಲಿ ನಗರ ಸಾರಿಗೆ ಸೌಲಭ್ಯ ಒದಗಿಸುವ ಬಗ್ಗೆ

(ಅ) ಮೈಸೂರು ಮಾನಸ ಗಂಗೋತ್ರಿಗೆ ಮತ್ತು ಮುಕ್ತ ವಿಶ್ವವಿದ್ಯಾನಿಲಯಕ್ಕೆ ನಗರ ಬಸ್ ನಿಲ್ದಾಣದಿಂದ ಹಾಗೂ ನಗರದ ಇತರೆ ಕಡೆಗಳಿಂದ ಪ್ರತಿ ದಿನ ಮೈಸೂರು ನಗರ ಮತ್ತು ಹೊರ ಊರುಗಳಿಂದ ಬರುವ ಸಾವಿರಾರು ವಿದ್ಯಾರ್ಥಿಗಳು ಒಡಾಡುತ್ತಿದ್ದು ಸೂಕ್ತ ನಗರ ಸಾರಿಗೆ ಸೌಲಭ್ಯ ಇಲ್ಲದೆ ತೊಂದರೆಗೆ ಒಳಗಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಮಾನಸಗಂಗೋತ್ರಿಗೆ ಹೋಗುತ್ತಿದ್ದ 135/134 ಮಾರ್ಗ ಸಂಖ್ಯೆಯ ಬಸ್‌ಗಳು ಕೂಡಾ ಸರಿಯಾಗಿ ಒಡಾಡದೇ ಗಂಗೋತ್ರಿಯ ಮತ್ತು ಮುಕ್ತ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳಿಗೆ ಮತ್ತು ಸಾರ್ವಜನಿಕರಿಗೆ ತೊಂದರೆ ಆಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಇ) ನಗರ ಬಸ್ ನಿಲ್ದಾಣದಿಂದ ಮಾನಸಗಂಗೋತ್ರಿಗೆ ಮತ್ತು ಗಂಗೋತ್ರಿಯಿಂದ ನಗರ ಬಸ್ ನಿಲ್ದಾಣಕ್ಕೆ ಸರಸ್ವತಿಪುರಂ ಮೂಲಕ ಮತ್ತು ರೈಲು ನಿಲ್ದಾಣ ಹಾಗೂ ವಿ.ವಿ.ಪುರಂ ಮೂಲಕ ಹೆಚ್ಚಿನ ಸಂಖ್ಯೆಯಲ್ಲಿ ಬಸ್‌ಗಳನ್ನು ಒಡಿಸಲು ಕ್ರಮ ತೆಗೆದುಕೊಳ್ಳಲಾಗುವುದೇ?